

# ದೊಂಬರ ಕೃಷ್ಣ

ಸರ್ವಶಕ್ತಿ ಫಿಲಂಸ್ ರವರ

ವರ್ಣದಲ್ಲಿ

ಸಂಗೀತ
ರಾಮಲಾಲ್ ಸೆಹರಾ

ಛಾಯಾಗ್ರಹಣ
ರವಿವರ್ಮ

ನಿರ್ದೇಶನ
ಹೆಚ್. ಎಂ. ಕೆ. ಮೂರ್ತಿ

* ಪನೋರಮಾ ಹಂಚಿಕೆ.....

# ಪಾತ್ರವರ್ಗ

ಹೊಸ ಪರಿಚಯ **ಮಾ. ಸುರೇಶ್**

**ಬೇಬಿ ಇಂದಿರಾ,** **ಮಾ. ಅರಣ್‌ಕುಮಾರ್,**

**ಬೇಬಿ ಲೀಲಾವತಿ,** **ಮಾ. ಶಶಿಕುಮಾರ್**

ಎಂ. ವಿ. ಸುಂದರಕೃಷ್ಣ ಅರಸ್, ವಾಸುದೇವರಾವ್, ಕೆ. ಎಂ. ಸಂಗೇಶ್, ಶ್ಯಾಮಲ, ಕಾತ್ಯಾಯಿನಿ, ಕು. ರೂಪ ಮತ್ತು ಮುಸರಿ ಕೃಷ್ಣಮೂರ್ತಿ ಮಾ|| ಸುರೇಶ್ ರಾವ್. ಮಾ| ಸುರೇಂದ್ರ ಕುಮಾರ್. ಮಾ|| ಹರ್ಷ, ಮಾ|| ಪಾಪು, ಮಾ|| ಚಂದ್ರಶೇಖರ್, ಮಾ|| ರವಿ ಬಣಕಾರ್. ಮಾ| ಉಮೇಶ್ ಬಣಕಾರ್, ಮಾ|| ಸುರೇಶ್ ಬಣಕಾರ್, ಮಾ|| ರಿಯಾಜ್, ಮಾ|| ಕೆ. ರಾಜೇಶ್, ಮಾ|| ಸಿ. ರಾಜೇಶ್, ಬೇಬಿ ಕೆ. ರಾಖಿ, ಬೇಬಿ ಬಬಿ, ಬೇಬಿ ವಂದನ, ಮಾ|| ಕಿಷೋರ್, ಬೇಬಿ ಟಿ. ಪಿ. ಹೇಮಲತ, ಬೇಬಿ ಮಾದೇವಿ. ಬೇಬಿ ರೂಪ ಮತ್ತು ಬೇಬಿ ಸ್ಮಿಥಾ.

ಹೆಚ್. ಬಿ. ಅರಸು, ವಿ. ವಿ. ರಾಜು, ಮುನಿ ಕುಮಾರ್, ಜೆ. ಆರ್. ಜಾನ್, ಆರ್ ಚಂದ್ರಶೇಖರ್ ಎಂ. ರಂಗಪ್ಪ, ದೋಣಿಗಾಲ್ ಬೈರಾಗ್, ದೋಣಿಗಲ್ ನಂಜಪ್ಪ. ಎಸ್.ವಿ. ಕೋದಂಡರಾಮು. ಇಂದಿರ ಶಿವಶಂಕರ್, ಕು|| ಗೀತಾಂಜಲಿ ಮನ್ಸೂರ್, ಧನಂಜಯ, ಕನಕದಾಸ್, ಅನಿಲ್‌ರಾಜ್, ಬಾಬು, ಸೋಮಶೇಖರ್, ಟಿ. ಆರ್. ರಾಜಣ್ಣ, ಡಬ್ಬಲ್ ಬಹದ್ದೂರ್, ಕೆ. ಸಿ ಬಸಪ್ಪ, ಕೆ. ಆರ್. ಜಗದೀಶ್, ಫೈಯಾಜ್, ಶಾಮಣ್ಣ, ಮೂರ್ತಿ, ಎಂ ಶ್ರೀನಿವಾಸ್, ಡಿ ಎಂ. ಕುಮಾರ್. ಎನ್. ಎಸ್. ಕುಮಾರ್, ಕೆ. ವಿ. ಕೆ. ರಾವ್, ಸಂಪಂಗಿ

ಆನೆ ಕೃಷ್ಣ, ಕೋತಿ, ನಾಯಿ, ಹುಲಿ ಹಾಗೂ ಹಾವುಗಳು

# ಕಥಾ ಸಾರಾಂಶ

ಧೈರ್ಯ, ಸಾಹಸ, ಔದಾರ್ಯವನ್ನು ಮೈಗೂಡಿಸಿಕೊಂಡ ಕೃಷ್ಣ ಶಿಶುವಾಗಿದ್ದಾಗಲೇ ತಾಯಿಯನ್ನು ಕಳೆದುಕೊಂಡು ತಂದೆ ಮೇಜರ್ ರಾಂಸಿಂಗ್ ರವರ ಲಾಲನೆಪಾಲನೆಯಲ್ಲಿ ಬೆಳೆದು ಬಾಲಕನಾಗುತ್ತಾನೆ. ಮನೆಯ ನೆಚ್ಚಿನ ಸೇವಕ ಸೋಲಿಗರ ಮಾಳ ಕೃಷ್ಣನಿಗೆ ಈಜುವುದನ್ನು ಕಲಿಸುವುದರೊಂದಿಗೆ ದೊಣ್ಣೆವರಸೆ ಹಾಗೂ ವ್ಯಾಯಾಮದ ವಿವಿಧ ಪ್ರಕಾರಗಳ ಪರಿಚಯ ಮಾಡಿಸುತ್ತಾನೆ. ಕಾಡು ಪ್ರಾಣಿಗಳ ಅನುಕರಣೆ ಮಾಡುವ ವಿಧಾನವನ್ನು ಕಲಿಸುವುದಲ್ಲದೆ ಗಿಡಮೂಲಿಕೆಗಳ ಪ್ರಯೋಗಗಳನ್ನು ಸಹ ಕಲಿಸುತ್ತಾನೆ. ಕಾಡು ಪ್ರಾಣಿಗಳೊಂದಿಗೆ ಕೃಷ್ಣನ ಸ್ನೇಹ ನಿಕಟವಾಗುತ್ತದೆ. ರಾಂಸಿಂಗ್‌ರವರ ಮನೆ ಪ್ರಾಣಿ ಸಂಗ್ರಹಾಲಯವಾಗುತ್ತದೆ.

ವೀರ ಬಾಲಕ ಕೃಷ್ಣ ತನ್ನ ಅನುಕರಣೀಯ ಗುಣಗಳಿಂದಾಗಿ ಸಹವಿದ್ಯಾರ್ಥಿಗಳಿಗೆ ಉಪಾಧ್ಯಾಯರಿಗೆ ಅಚ್ಚುಮೆಚ್ಚಿನವನಾಗುತ್ತಾನೆ. ತಂದೆಯ ಜೊತೆಯಲ್ಲಿ ಕಳ್ಳಸಾಗಾಣಿಕೆಯವರೊಂದಿಗೆ ವೀರಾವೇಶದಿಂದ ಹೋರಾಡಿ ತಂದೆಯ ಇಮ್ಮಡಿ ಪ್ರೋತ್ಸಾಹಕ್ಕೆ ಪಾತ್ರನಾಗುತ್ತಾನೆ.

ಒಮ್ಮೆ ರಾಂಸಿಂಗ್ ಮತ್ತು ಮಾಳನೊಂದಿಗೆ ಹುಲಿ ಬೇಟೆಗೆ ಹೋಗಿ ಹಿಂದಿರುಗುತ್ತಿದ್ದಾಗ ನದಿ ಮಧ್ಯದಲ್ಲಿ ಪ್ರವಾಹಕ್ಕೆ ಸಿಲುಕಿ ಹರಿಗೋಲು ಮುಳುಗಿ ಹೋಗುತ್ತದೆ. ರಾಂಸಿಂಗ್, ಮಾಳ ಮತ್ತು ಕೃಷ್ಣ ಕಣ್ಮರೆಯಾಗುತ್ತಾರೆ.

ನದಿಯಲ್ಲಿ ಮುಳುಗಿ ಕಣ್ಮರೆಯಾದ ಕೃಷ್ಣ ಮಾರನೆಯದಿನ ನದೀ ತೀರದಲ್ಲಿ ಬಿದ್ದಿರುತ್ತಾನೆ. ಕಣ್ಣು ತೆರೆದು ಭಯದಿಂದ ಸುತ್ತಮುತ್ತಲು ನೋಡಿದಾಗ ಮರಳಿನ ಮೇಲೆ ಆಟವಾಡುತ್ತಾ ಕುಳಿತ್ತಿದ್ದ ಲಚ್ಚಿಯನ್ನು ಕಾಣುತ್ತಾನೆ. ಬಾಲಸಹಜವಾದ ಚೇಷ್ಟೆಯಿಂದ ಕೃಷ್ಣ ಅವಳನ್ನು ಅಣಕಿಸುತ್ತಾನೆ. ಕೋಪಗೊಂಡ ಲಚ್ಚಿ ಕೃಷ್ಣನನ್ನು ಹೊಡೆಯಲು ದೊಂಬರ ಬಾಲಕ ಬಾಲಕಿಯರನ್ನು ಕರೆದುಕೊಂಡು ಬರುತ್ತಾಳೆ. ಈ ವೇಳೆಗೆ ಕೃಷ್ಣನು ತಂದೆಯನ್ನೂ, ಮಾಳನನ್ನೂ ಜ್ಞಾಪಿಸಿಕೊಂಡು ಅಳುತ್ತಿರುತ್ತಾನೆ. ಅದನ್ನು ಕಂಡು ಮರುಗಿದ ಲಚ್ಚಿ ಕೃಷ್ಣನನ್ನು ತನ್ನ ತಾತನಾದ ಬಾಬನ ಬಳಿಗೆ ಕರೆದುಕೊಂಡು ಹೋಗುತ್ತಾಳೆ.

ಮೊಮ್ಮಗನ ಅಕಾಲ ಮೃತ್ಯುವಿನಿಂದ ಸೋರಿಗಿ ಹೋಗಿದ್ದ ದೊಂಬರ ಯಜಮಾನ ಬಾಬನಿಗೆ ತನ್ನ ಮೊಮ್ಮಗನೇ ಹಿಂದಿರುಗಿ ಬಂದಂತೆ ಭಾಸವಾಗುತ್ತದೆ. ಬಾಬ, ಅವನ ಮಗಳು ರಾಧ ಕೃಷ್ಣನನ್ನು ಅತ್ಯಂತ ವಾತ್ಸಲ್ಯದಿಂದ ಕಾಣುತ್ತಾರೆ.

ಮೊದಲೇ ವ್ಯಾಯಾಮ ಶಾಲೆಯಲ್ಲಿ ಚುತುರನಾಗಿದ್ದ ಕೃಷ್ಣ ದೊಂಬರ ಕಸರತ್ತಿನಲ್ಲಿ ತನ್ನ ಚಾತುರ್ಯವನ್ನು ತೋರಿಸಿ, ದೊಂಬರೆಲ್ಲರ ಪ್ರೀತಿಗೆ ಪಾತ್ರನಾಗುತ್ತಾನೆ. ದೊಂಬರ ದೊಡ್ಡಿಯ ನಕಲೀ ಶ್ಯಾಮ ತುಕ್ಯ ಮತ್ತು ಅವನ ಶಿಷ್ಯ ಪಾಂಡು ಕೃಷ್ಣನ ಸಂಗಾತಿಗಳಾಗುತ್ತಾರೆ.

ಕೃಷ್ಣನಿಗೆ ಆನೆಯೊಂದು ಕಾಡಿನಿಂದ ಊರೊಳಗೆ ನುಗ್ಗಿ ಹಾವಳಿ ಮಾಡುತ್ತಿರುವ ವಿಚಾರ ತಿಳಿಯುತ್ತದೆ. ಬಾಬ ಮತ್ತು ಇತರರು ಅಡ್ಡಿಮಾಡಿದರೂ ಲೆಕ್ಕಿಸದೆ ಆನೆಯ ಕಾಲಿಗೆ ಚುಚ್ಚಿ ಕೊಂಡಿದ್ದ ಕಾರೆಯಮುಳ್ಳನ್ನು ಕೀಳುತ್ತಾನೆ. ಕೃಷ್ಣನು ಆನೆಯ ಗೆಳೆಯನಾಗುತ್ತಾನೆ.

ಕುಡಿತದ ಚಟಕ್ಕೆ ಸಿಲುಕಿದ ದೊಂಬರ ಹುಡುಗರು ಮತ್ತು ಇತರರನ್ನು ಕುಡಿತದ ಚಟದಿಂದ ಪಾರುಮಾಡಿದನೆ? ರಾಧಳನ್ನು ಪಂಚರಂಗಿಯ ಅತ್ಯಾಚಾರಕ್ಕೆ ಒಳಗಾಗದಂತೆ ರಕ್ಷಿಸಿದನೇ?

ಆನೆ ಪಂಚರಂಗಿಯಿಂದ ಅಪಹರಿಸಲ್ಪಟ್ಟ ಕೃಷ್ಣನನ್ನು ಬಿಡಿಸಿತೆ?

ಹೆಂಡ ಕುಡಿದು ಮದವೇರಿದ ಆನೆ ತುಕ್ಯನನ್ನು ಏನು ಮಾಡಿತು?

ಕೃಷ್ಣನು ದೊಂಬರ ಜೊತೆಯಲ್ಲಯೆಉಳಿದನೆ ಅಥವಾ ಅವರ ಪರಿವರ್ತನೆಗೆ ಕಾರಣನಾದನೆ?

ಈ ಪ್ರಶ್ನೆಗಳಿಗೆ ಸಮಂಜಸವಾದ ಉತ್ತರಗಳು ದೊಂಬರ ಕೃಷ್ಣ ಚಿತ್ರದಿಂದ ಮಾತ್ರ ಸಾಧ್ಯ.

?

# ಹಾಡುಗಳು

ಹಾಡು 1 ರಚನೆ : ಎಸ್. ರುದ್ರಮೂರ್ತಿ ಶಾಸ್ತ್ರಿ
ಹಾಡಿದವರು : ಎಸ್. ಜಾನಕಿ

ಪಲ್ಲವಿ ಹಾವನ್ನು ಹಿಡಿದೆ
ನಾಗರ ಹಾವನ್ನು ಹಿಡಿದೆ
ಈ ಕಾಡಿಗೆ ನಾನೇ ರಾಜಕುಮಾರ ।
ಭಯವೇ ಕಾಣದ ನಾನೇ ಧೀರ ।
ಹಿಡಿಯುವರಾರಿಲ್ಲ ನನ್ನ
ತಡೆಯುವರಾರಿಲ್ಲ ।
ಈ ಕಾಡಿಗೆ ನಾನೇ ರಾಜಕುಮಾರ ।
ಭಯವೇ ಕಾಣದ ನಾನೇ ಧೀರ ।
ಹಿಡಿಯುವರಾರಿಲ್ಲ । ನನ್ನ
ತಡೆಯುವರಾರಿಲ್ಲ ॥
ಈ ಕಾಡಿಗೆ ನಾನೇ ರಾಜಕುಮಾರ ॥

ಚರಣ--- ದ್ವಾಪರಯುಗದಲಿ ಶ್ರೀ ಕೃಷ್ಣ
ಕಾಳಿಂಗನ ಕೊಂದ ।
ದ್ವಾಪರಯುಗದಲಿ ಶ್ರೀ ಕೃಷ್ಣ
ಕಾಳಿಂಗನ ಕೊಂದ ।
ಕಲಿಯುಗದಲ್ಲಿ ಈ ಕೃಷ್ಣ
ಕಲಿಯುಗದಲ್ಲಿ ಈ ಕೃಷ್ಣ
ಹಾವನ್ನೇ ಹಿಡಿದ । ನಾಗರ ಹಾವನ್ನೇ ಹಿಡಿದ ।
ಆ ಕೃಷ್ಣನೇನು ಮಿಗಿಲು
ನಾನವನಿಗಿಂತ ಮೇಲು ।
ಈ ಕಾಡಿಗೆ ನಾನೇ ರಾಜಕುಮಾರ ॥ 1 ॥

ಚರಣ--- ಕಳ್ಳ ಬೆಕ್ಕೆ ನೀನು ಕಣ್ಮುಚಿ
ಇಲಿಗಳ ಧ್ಯಾನಿಸಿಪೆಯಾ ।
ಕಳ್ಳ ಬೆಕ್ಕೆ ನೀನು ಕಣ್ಮುಚ್ಚಿ
ಇಲಿಗಳ ಧ್ಯಾನಿಸಿಪೆಯಾ ।

(ಮಿಯಾವ್, ಮಿಯಾವ್)
ಮುದ್ದಿನ ಗಿಳಿಯೇ ನೀನು ನನ್ನ
ಮುದ್ದಿನ ಗಿಳಿಯೇ ನೀನು ನನ್ನ
ಹೆಸರನು ನುಡಿಯುವೆಯಾ ।
ಹೆಸರನು ನುಡಿಯುವೆಯಾ ।
(ಕೃಷ್ಣ, ಕೃಷ್ಣ)
ಜೋಕಾಲೆ ಆಡೋ ಮಂಗ ।
ಬಿಡದಿರು ನಾಯಿಯ ಸಂಗ ।
(ಕೋತಿ ಕಿಚ್ . . . ಕಿಚ್ . . . ಕಿಚ್)
ಈ ಕಾಡಿಗೆ ನಾನೇ ರಾಜಕುಮಾರ ॥2॥
ಚರಣ— ಮುಸಿ ಮುಸಿ ಎನ್ನುವ ಮುಂಗಸಿಯೇ
ಕೋಪ ಬೇಡಣ್ಣ ।
ಮುಸಿ ಮುಸಿ ಎನ್ನು ಮುಂಗಸಿಯೇ
ಕೋಪ ಬೇಡಣ್ಣ
ಇಂದಿನಿಂದ ಇದು ನಿನ್ನದೆ ಮನೆಯು ।
ಇಂದಿನಿಂದ ಇದು ನಿನ್ನದೆ ಮನೆಯು ।
ತಿಳಿಯೋ ನಾಗಣ್ಣ ।
ತಿಳಿಯೋ ನಾಗಣ್ಣ ।
ಗೆಳೆಯರಿಲ್ಲಿ ನೀವೆಲ್ಲ
ಜಗಳವೆಂಬುದೇ ಇಲ್ಲ ॥3॥
ಈ ಕಾಡಿಗೆ ನಾನೇ ರಾಜಕುಮಾರ
ಭಯವೇ ಕಾಣದ ನಾನೇ ಧೀರ
ಹಿಡಿಯುವರಾರಿಲ್ಲ ನನ್ನ
ತಡೆಯುವರಾರಿಲ್ಲ
ಈ ಕಾಡಿಗೆ ನಾನೇ ರಾಜಕುಮಾರ

ಹಾಡು: 2 ರಚನೆ ಎಸ್. ಕೆ. ಕರೀಂಖಾನ್

ಹಾಡಿದವರು : ವಾಣಿ ಜಯರಾಂ

ಪಲ್ಲವಿ— ಆಡುವ ನಾವಾಡುವ ಆಡುತ ನಲಿದಾಡುವ ।
ಆಡುವ ನಾವಾಡುವ ಆಡುತ ನಲಿದಾಡುವ ।
ನಮ್ಮ ಪುಣ್ಯ ಫಲಿಸಿತೆಂದು ಹಾಡುತ ಕುಣಿದಾಡುವ ॥
ಆಡುವ ನಾವಾಡುವ ಆಡುತ ನಲಿದಾಡುವ ।
ಆಡುವ ನಾವಾಡುವ ಆಡುತ ನಲಿದಾಡುವ ॥

ಚರಣ— ಪುಣ್ಯ ತಾಯಿ ಭಾಗ್ಯದಾಯಿ ನಮ್ಮ ಸರ್ವಶಕ್ತಿ ನೀನು ।
ಸಿಸ್ಟ ವಚನ ಮುತ್ತುರತುನ ನೀನೆ ನಮ್ಮ ಕಾಮಧೇನು ।
ಬಾ ನನ್ನ ಬಾಲಚಂದ್ರ ಕೇಳು ನಿನಗೆ ಏನು ಬೇಕು ?
ಅಮ್ಮ ನನಗೆ ಮಾವು ಬೇಕು ।
ಅಮ್ಮ ನನಗೆ ಲಾಡುಬೇಕು ।
ಅಮ್ಮ ನನಗೆ ದ್ರಾಕ್ಷಿ ಬೇಕು ।
ಅಮ್ಮ ನನಗೆ ನೀನು ಬೇಕು ।
ಬಯಸಿ ತಂದ ಭಾಗ್ಯವಿಹುದು ಪಡೆದು ಸುಖಿಗಳಾಗುವ ॥1॥
ಆಡುವ ನಾವಾಡುವ ಆಡುತ ನಲಿದಾಡುವ ।
ಆಡುವ ನಾವಾಡುವ ಆಡುತ ನಲಿದಾಡುವ ॥

ಚರಣ— ಜಾತಿ ಮತ ವಿಭೇದವಿಲ್ಲ ಬಡವ ಧನಿಕ ಜಗಳವಿಲ್ಲ ।
ಕಷ್ಟ ನಷ್ಟ ಕಾವು ಇಲ್ಲಾ, ಅಂಕೆ ಶಂಕೆ ನೋವು ಇಲ್ಲಾ ।
ಜನನ ಮರಣ ಬಾಧೆಯಿಲ್ಲ, ರೋಗರುಜಿನ ಭೀತಿಯಿಲ್ಲ ।
ಸತ್ಯಧರ್ಮ ಜೀವ ಪಡೆದ ಪುಣ್ಯ ರೂಪ ನೀವೆ ಎಲ್ಲಾ ।
ಪುಣ್ಯದ ಈ ಲೋಕದಲ್ಲಿ ಪುಣ್ಯವಂತರಾಗುವ । ॥2॥
ಆಡುವ ನಾವಾಡುವ ಆಡುತ ನಲಿದಾಡುವ ।
ಆಡುವ ನಾವಾಡುವ ಆಡುತ ನಲಿದಾಡುವ ।

ಚರಣ— ಮಧುವಸಂತನೋಲಗ ಈ ಲಸಿತ ಲಲಿತ ಸುಮವನ ।
ಪಿಕ ಸಮೂಹದಿಂಚರ ಮಧುರ ಕೀರ ಗಾಯನ ।
ಮಂದಪವನ ಚಲಿಸುತಿಹನು ಸುರಭಿ ಹೊತ್ತು ಚಣ ಚಣ ।

ತರುವು ತೂಗಿ ಲತೆಯು ಬಾಗಿ ಈವ ರಮ್ಯ ದರುಶನ ।
ಹಾಲು ಜೇನು ಹರಿಯುತಿಹುದು ಕುಡಿದು ಕಲಿಗಳಾಗುವ ||3||
ಆಡುವ ನಾವಾಡುವ ಆಡುತ ನಲಿದಾಡುವ ।
ಆಡುವ ನಾವಾಡುವ ಆಡುತ ನಲಿದಾಡುವ ।
ನಮ್ಮ ಪುಣ್ಯ ಫಲಿಸಿತೆಂದು ಹಾಡುತ ಕುಣಿದಾಡುವ ॥
ಆಡುವ ನಾವಾಡುವ ಆಡುತ ನಲಿದಾಡುವ ।
ಆಡುವ ನಾವಾಡುವ ಅಡುತ ನಲಿದಾಡುವ ॥

ಹಾಡು 3

ರಚನೆ : ಎಸ್. ರುದ್ರಮೂರ್ತಿ ಶಾಸ್ತ್ರಿ

ಹಾಡಿದವರು : ಬಿ. ಪ್ರಭಾಕರ್ ಮತ್ತು ಸಿ. ಕೆ. ರಮಾ

ಪಲ್ಲವಿ— ಜಾಣ ನರಿಯು ಕತೆಯೊಂದ ।
ನೋಡಿರಿ ಬಾಲರೆ ಮುದದಿಂದ ।
ಜಾಣ ನರಿಯು ಕತೆಯೊಂದ ।
ನೋಡಿರಿ ಬಾಲರೆ ಮುದದಿಂದ ||
ಬುದ್ಧಿಗೆ ಚುರುಕು ಮಾತಿಗೆ ಸರಕು
ಕೊಡುವುದು ನಿಮಗೆ ಒಲಿವಿಂದ ।
ಜಾಣ ನರಿಯು ಕತೆಯೊಂದ ।
ನೋಡಿರಿ ಬಾಲರೆ ಮುದದಿಂದ ।

ಚರಣ - ಕಾಡಿನ ನಡುವಿನ ದಾರಿಯಲಿ ।
ತನ್ನ ಕುವರಿಯ ಜೊತೆಯಲ್ಲಿ ।
ಬ್ರಾಹ್ಮಣನೊಬ್ಬನು ಒಂದು ದಿನ ।
ಸಾಗುತಲಿದ್ದನು ತವಕದಲಿ ||1||
ಅಯ್ಯಾ ಧರ್ಮದಾತರೇ ಕರುಣಾವಂತರೆ ।
ಬೋನಿನಿಂದ ಬಿಡಿಸಿರಯ್ಯ ಪುಣ್ಯಾವಂತರೇ ।
ಕಷ್ಟದಲ್ಲಿ ಸಿಲುಕಿರುವೆನು ನೆರವು ನೀಡಿರಿ ।
ನಿಮ್ಮ ದಾಸನಾಗಿ ಇರುವೆ ದಯುವ ತೋರಿರಿ ||2||

ಅಯ್ಯೋ ಪಾಪ ಬೇಡುತಿಹುದು ಹುಲಿಯು ನೋಡಪ್ಪ ।
ಹೋದರ್ಹೋಗಲಿ ಬಿಡಿಸಿಪುಣ್ಯವ ಕಟ್ಟಿಕೊಳ್ಳಪ್ಪ ।
ಬೇಡ ಮಗಳೇ ಬೇಡ ಇವನು ಬಹಳ ದುಷ್ಟನು ।
ಹೊರಗೆ ಬರಲು ಇಬ್ಬರನ್ನು ತಿಂದು ಬಿಡುವನು ||3||
ದುಷ್ಟನಲ್ಲ ಕೇಳಿರಯ್ಯ ಸಾಧು ಸಂತನು ।
ಕ್ರೂರಿಯಲ್ಲ ಬಿಡಿಸಿರಯ್ಯ ನಿಮ್ಮ ದಾಸನು ।
ನಿಮ್ಮ ಕೆರವ ತಲೆಯ ಮೇಲೆ ಹೊತ್ತು ನಡೆಯುವೆನು ।
ನಿಮ್ಮ ಮನೆಯ ಬಾಗಿಲನ್ನು ಕಾಯುತ್ತಿರುವೆನು ||4||
ಹಸಿದು ಹಸಿದು ಬಳಲಿದೆ
ಒಳಗೆ ಕುಳಿತು ನರಳಿದೆ ।
ನಾನು ಇರುವ ಕಡೆಗೆ ಇದೋ
ಒಳ್ಳೇ ಊಟ ಬಂದಿದೆ ।
ನಿಮ್ಮನೀಗ ತಿಂದು ಬಿಡುವೆ
ನನ್ನ ಹಸಿವ ನೀಗಿ ಕೊಳ್ಳುವೆ ।
ಸಿದ್ಧರಾಗಿರಿ
ಸಿದ್ಧರಾಗಿರಿ ||5||
ಎಂಥ ನ್ಯಾಯ ಎಂಥ ನೀತಿ
ಧರ್ಮವಲ್ಲ ನಿನ್ನ ರೀತಿ ।
ಕಷ್ಟದಲ್ಲಿ ಇದ್ದ ವೇಳೆ
ಬೇಡಿಕೊಂಡೆ ವಿನಯದಿಂದ ।
ಹೊರಗೆ ಬಂದ ಕೂಡಲೇ ನೀ, ಘರ್ಜಿಸುವೆ ರೋಷದಿಂದ ।
ಎಂಥ ನ್ಯಾಯ ಎಂಥ ನೀತಿ
ಧರ್ಮವಲ್ಲ ನಿನ್ನ ರೀತಿ ||6||
ಕಾರ್ಯವಾಸಿ ಕತ್ತೆ ಕಾಲು
ಹಿಡಿಯಬೇಕು ಎಂಬರು ।
ತಮ್ಮ ಕಾರ್ಯವಾಗಲೆಂದು, ಎಲ್ಲ ಶೋಕ ನಟಿಪರು ।
ತೊಲಗು ನೀನು ಕೆಟ್ಟ ಮುದುಕ

ನನಗೆ ಬೇಕು ಹುಡುಗಿಯು ||7||
ಹುಡುಗಿಯೆಂದ ಕೂಡಲೇ
ತರುಣ ಹುಡುಗ ಮುದುಕರು |
ನನಗು ತನಗು ಹುಡುಗಿಯೆಂದು
ಬಾಯಿ ಬಾಯಿ ಬಿಡುವರು |
ತನಗು ಹುಡುಗಿ ಬೇಕು ಎಂದು
ಬಾಯಿ ಬಿಡುವುದು ಈ ಹುಲಿ |
ಅಯ್ಯೋ ದೇವರೇ
ಏನು ಹೇಳಲಿ
ಏನಿದೇನಿದು ಅಚ್ಚರಿ ||8||
ಏನು ಗಲಭೆ ಏನು ಜಗಳ
ಏನು ನಿಮ್ಮ ತೊಂದರೆ |
ನ್ಯಾಯ ತಿಳಿದ ನೀನೆ ಹೇಳು
ಬೋನಿನಲ್ಲಿ ಈ ಹುಲಿ |
ಕುಳಿತು ಅಳುತ ಬೇಡಿತಯ್ಯ
ಅಯ್ಯ ನನ್ನ ಬಿಡಿಸಿರಿ ||9||
ನಿಜವೆ ಇದು ಹುಲಿರಾಯ
ಈತ ಹೇಳುತ್ತಿರವುದು |
ಬಿಡಿಸು ಎಂದು ಬೋನಿನಲ್ಲ
ಸಿಲುಕಿ ಬೇಡಿ ಕೊಂಡೆಯಾ |
ನಿಜವೇ ಇದು ಹುಲಿರಾಯ
ಈತ ಹೇಳುತ್ತಿರುವುದು |
ಬಿಡಿಸು ಎಂದು ಬೋನಿನಲ್ಲಿ
ಸಿಲುಕಿ ಬೇಡಿ ಕೊಂಡೆಯಾ ||10||
ಹೌದು ಬೇಡಿಕೊಂಡೆ
ಆಗ ನಾನು ಸೆರೆಯಲ್ಲಿದ್ದೆ |
ಹಸಿದ ವೇಳೆ ಕೈಗೆ ಸಿಕ್ಕ

ಊಟವನ್ನು ಬಿಡುವುದೇ।
ಹುಲಿಯು ಹುಲ್ಲು ತಿಂಬುದೆ
ಸ್ವಲ್ಪ ತಾಳು ವ್ಯಾಘ್ರರಾಜ
ಇಷ್ಟು ಕೋಪವೇತಕೆ ?
ನ್ಯಾಯ ನಿಯಮ ಇರುವುದೆಲ್ಲ, ನಿನ್ನದೇ ಸಹಾಯಕ್ಕೆ ।
ಸ್ವಲ್ಪ ತಾಳು ವ್ಯಾಘ್ರರಾಜ
ಇಷ್ಟು ಕೋಪವೇತಕೆ? ॥12॥

ಮುದುಕನಿವನು ಒಳ್ಳೆಯವನು
ಕ್ರೂರಿಯಿರುವುದು ಈ ಹುಲಿ ।
ಹುಡುಗಿಯಾ ಕಂಡೆರೆ ಮರುಗುವುದು ಈ ಮನ ।
ಬುದ್ಧಿಯಾ ಓಡಿಸಿ ಬೇಗ ಇವರ ಬಿಡಿಸುವೆ ॥13॥

ಇರಲಿ ಇರಲಿ ನಡೆದ ವಿಷಯ
ತಿಳಿಯಬೇಕು ನಾನು ಈಗ ।
ಇವನು ಮುದುಕ ಹೇಗೆ ಬಂದ
ಹೇಗೆ ನಿನ್ನ ಬಿಡಿಸಿದ ।
ಇವನು ಬರುವ ಮೊದಲು ನೀನು
ಎಲ್ಲಿ ಇದ್ದೆ ? ಹೇಗೆ ಇದ್ದೆ ?
ಬೋನಿನೊಳಗೆ ಇದ್ದಯೇನು
ಹೇಗೆ ನನಗೆ ತೋರಿಸು ।
ಹೇಗೆ ನನಗೆ ತೋರಿಸು ॥14॥

ಉಪಕಾರಕ್ಕೆ ಯೋಗ್ಯವಲ್ಲ ದುಷ್ಟ ಜನರು ಎಂದಿಗು
ಸೆರೆಯ ಒಳಗೆ ಸಾಯಬೇಕು ಬಿಡಿಸಬಾರದೆಂದಿಗು ।
ಅಯ್ಯೋ ಮುದುಕ, ಸ್ವಾರ್ಥಿಗಳಿಗೆ ಕರುಣೆ ತೋರಬಾರದು ।
ನಮಗೆ ಕೇಡು ಬರಲಿ ಪಾಡು ಅಯ್ಯೋ ಎನ್ನಬಾರದು ॥15॥

ಮರಯಲಾರೆ ನಿನ್ನ ಋಣವ

ಪ್ರಾಣ ಉಳಿಸಿದ ಜಾಣ ನರಿಯೇ |
ಹೋಗಿ ಬರುವೆವು ನಮೋ ನಮಃ |
ಹೋಗಿ ಬರುವೆವು ನಮೋ ನಮಃ |
ಹೋಗಿ ಬರುವೆವು ನಮೋ ನಮಃ |

ಹಾಡು: 4 ರಚನೆ: ಎಸ್. ರುದ್ರಮೂರ್ತಿ ಶಾಸ್ತ್ರಿ

ಹಾಡಿದವರು : ಎಸ್. ಜಾನಕಿ ಮತ್ತು ಸಿ. ಕೆ. ರಮಾ

ಪಲ್ಲವಿ— ಕಲಹ ಬೇಡ ರಾಧ ರಾಣಿ
ಕೋಪವೇಕೆ ಕಣ್ಮಣಿ |
ಕಲಹ ಬೇಡ ರಾಧ ರಾಣಿ
ಕೋಪವೇಕೆ ಕಣ್ಮಣಿ |
ಮುಡಿಯು ಕೆದರಿ ಗಲ್ಲ ನಿಮಿರಿ
ರೋಷಗೊಂಡ ರುಕ್ಮಿಣಿ ||
ಕಲಹ ಬೇಡ ರಾಧ ರಾಣಿ
ಕೋಪವೇಕೆ ಕಣ್ಮಣಿ |
ಮುಡಿಯು ಕೆದರಿ ಗಲ್ಲ ನಿಮಿರಿ
ರೋಷಗೊಂಡ ರುಕ್ಮಿಣಿ |
ಕಲಹ ಬೇಡ ರಾಧ ರಾಣಿ
ಕೋಪವೇಕೆ ಕಣ್ಮಣಿ ||
ಚರಣ— ಕೆಟ್ಟ ಮುಖದ ಇವಳ ಕಂಡು
ಮೋಸ ಹೋದೆಯಾ ?
ಕೆಟ್ಟ ಮುಖದ ಇವಳ ಕಂಡು
ಮೋಸ ಹೋದೆಯಾ ?
ಮಾಯಗಾತಿ ಮಾತ ಕೇಳಿ

ಮರುಳೆ ನಾದೆಯಾ ?
ಮಾಯಗಾತಿ ಮಾತಕೇಳಿ
ಮರುಳನಾದೆಯಾ ?
ನೀನ್ನ ಮೋರೆ ಬಹಳ ಚಂದ
ಕರಡಿಯಂತಿದೆ
ನಿನ್ನ ಮೋರೆ ಬಹಳ ಚಂದ
ಕರಡಿಯಂತಿದೆ
ನಿನ್ನ ಮನದ ತುಂಬ ಬರಿಯು
ವಿಷವೆ ತುಂಬಿದೆ
ನಿನ್ನ ಮನದ ತುಂಬ ಬರಿಯು
ವಿಷವೆ ತುಂಬಿದೆ
ನಿನ್ನ ಮನದ ತುಂಬ ಬರಿಯು
ವಿಷವೆ ತುಂಬಿದೆ ||೧||

ಕಲಹ ಬೇಡ ರಾಧ ರಾಣಿ
ಕೋಪವೇಕೆ ಕಣ್ಮಣಿ
ಕಲಹ ಬೇಡ ರಾಧ ರಾಣಿ
ಕೋಪವೇಕೆ ಕಣ್ಮಣಿ
ಚರಣ— ಸಾಕು ಸಾಕು ಮಾತು ಬೇಡ
ಕೃಷ್ಣನೊಂದಿಗೆ ।
ಸಾಕು ಸಾಕು ಮಾತು ಬೇಡ
ಕೃಷ್ಣನೊಂದಿಗೆ
ಇನ್ನು ಮೇಲೆ ಬರಲೆ ಬೇಡ
ಅವನ ತಂಟೆಗೆ ।
ಇನ್ನು ಮೇಲೆ ಬರಲೆ ಬೇಡ
ಅವನ ತಂಟೆಗೆ ।
ನಿನ್ನ ಕಷ್ಣನಲ್ಲ ಅವನು
ನನ್ನ ಕೃಷ್ಣನು ।

ನಿನ್ನ ಕೃಷ್ಣನಲ್ಲ ಅವನು
ನನ್ನ ಕೃಷ್ಣನು ।
ನನ್ನ ಮಾನ ನನ್ನ ಪ್ರಾಣ
ನನ್ನ ದೇವನು ।
ನನ್ನ ಮಾನ ನನ್ನ ಪ್ರಾಣ
ನನ್ನ ದೇವನು ।
ನನ್ನ ಮಾನ ನನ್ನ ಪ್ರಾಣ
ನನ್ನ ದೇವನು । ॥2॥
ಇವಳು ಸಿಡುಕಿ ಬಾಯಿ ಬಡುಕಿ
ರಾಧೆ ಮೋಹಿನಿ ।
ಇವಳು ಸಿಡುಕಿ ಬಾಯಿ ಬಡುಕಿ
ರಾಧೆ ಮೋಹಿನಿ ।
ಜಗಳದಲ್ಲಿ ಬಹಳ ಜಾಣೆ
ರುಕ್ಮಿಣೀ ಮಣಿ ।
ಜಗಳದಲ್ಲಿ ಬಹಳ ಜಾಣೆ
ರುಕ್ಮಿಣೀ ಮಣಿ । ॥3॥
ಕಲಹ ಬೇಡ ರಾಧ ರಾಣಿ
ಕೋಪವೇಕೆ ಕಣ್ಮಣಿ ।
ಮುಡಿಯು ಕೆದರಿ ಗಲ್ಲ ಸಿಮಿರಿ
ರೋಷಗೊಂಡ ರುಕ್ಮಿಣಿ ।
ಕಲಹ ಬೇಡ ರಾಧ ರಾಣಿ
ಕೋಪವೇಕೆ ಕಣ್ಮಣಿ ।
ಕಲಹ ಬೇಡ ರಾಧ ರಾಣಿ
ಕೋಪವೇಕೆ ಕಣ್ಮಣಿ ॥



# ತಾಂತ್ರಿಕವರ್ಗ

| | |
|---|---|
| ಕಥೆ : (ಬನದಿ ಬಿರಿದ ಕುಸುಮ ಆಧಾರಿತ) | ತ. ಪು. ವೆಂಕಟರಾವ್ |
| ಚಿತ್ರ ಕಥೆ, ಸಂಭಾಷಣೆ | ಎಸ್. ಕೆ. ಕರೀಂ ಖಾನ್ |
| ಹೊರಾಂಗಣ ಸಲಕರಣೆ | ಸುಜಾತ ಮೂವಿಟೋನ್ ಬೆಂಗಳೂರು |
| ಹಾಡುಗಳ ಧ್ವನಿ ಮುದ್ರಣ | ವಿಜಯವಾಹಿನಿ, ಮದ್ರಾಸು |
| ಶಬ್ಧಗ್ರಹಣ | ಚಾಮುಂಡೇಶ್ವರಿ ಸ್ಟುಡಿಯೋ, ಬೆಂಗಳೂರು |
| ರೀರಿಕಾರ್ಡಿಂಗ್ | ಪ್ರಸಾದ್ ಸ್ಟುಡಿಯೋ ಮದ್ರಾಸು |
| ಸಾಹಸ | ಎಂ. ಗಣೇಶ್, ಕುಪ್ಪಸ್ವಾಮಿ (ಶ್ರೀ ಗಣಪತಿ ವ್ಯಾಯಾಮ ಶಾಲೆ |
| ವರ್ಣಾಲಂಕಾರ | S. V. S. ಮಲ್ಲಿ, ನಾಗರಾಜ, ನರಸಯ್ಯ |
| ವಸ್ತ್ರಾಲಂಕಾರ | ಪುಟ್ಟಣ್ಣ ಕೊಳ್ಳೇಗಾಲ |
| ಸಹಾಯಕ | ಪಾಂಡು |
| ನೃತ್ಯ | ಧೈರ್ಯನಾಥನ್, ಮತ್ತು ಕಾನಕಾನಹಳ್ಳಿ ಗೋಪಿ |
| ಸಹ ನಿರ್ದೇಶನ | ಎಂ. ಚಂದ್ರಶೇಖರ |
| ಛಾಯಾಗ್ರಹಣ | ರವಿವರ್ಮ ರಾಜ |
| ಸಹಾಯಕರು | ಶ್ರೀನಿವಾಸ ಮೂರ್ತಿ |
| ಶಬ್ಧಗ್ರಹಣ | ಕೆ. ನಾಗರಾಜ |
| ಸ್ಟಿಲ್ಸ್ | ಸೈಟ್ ಫೋಟೋ ಸ್ಟುಡಿಯೋ, ಹೊಸಕೋಟೆ<br>ಸ್ಟುಡಿಯೋ ಕಮಲ್, H.A.L. |
| ಹಾಡುಗಳು | S. ರುದ್ರಮೂರ್ತಿ ಶಾಸ್ತ್ರಿ, S. K. ಕರೀಂ ಖಾನ್ |
| ಹಿನ್ನೆಲೆಗಾಯಕರು | ವಾಣಿಜಯರಾಂ, S. ಜಾನಕಿ, C.K. ರಮಾ D. ಪ್ರಭಾಕರ |
| ಸಂಗೀತ | ರಾಮಲಾಲ ಸೆಹ್ರಾ |
| ಸಂಕಲನ R. ಶ್ರೀರಾಮುಲು S.I.C.A. | ಸಹಾಯಕ ನರಸಯ್ಯ |
| ನಿರ್ಮಾಣ, ನಿರ್ವಹಣೆ | B.S. ಪರಮಶಿವಯ್ಯ |
| ಕಾರ್ಯ ನಿರ್ವಹಣೆ | D. M. ಕುಮಾರ, G. R. ಜರ್ಾ |
| ನಿರ್ಮಾಪಕರು | ಶ್ರೀಮತಿ ಶಶಿಕಲ M. ಶೆಟ್ಟಿ B. S. ಪರಮಶಿವಯ್ಯ<br>H.M.K. ಮೂರ್ತಿ |
| ನಿರ್ದೇಶನ H. M. K. ಮೂರ್ತಿ | ಹಂಚಿಕೆ ಮನೋರಮ ರಿಕ್ರಿಯೇಷನ್ |

